ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ರೈತರ ಕೃಷಿ ಭೂಮಿಗೆ ಕೊಳವೆ ಬಾವಿಯಿಂದ ನೀರು ಹರಿಸಲು ವಿದ್ಯುತ್ ಸಂಪರ್ಕ ನೀಡುವ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

276 (465) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಮಂಡ್ಯ ಜಿಲ್ಲೆ ನಾಗಮಂಗಲ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ರೈತರ ಕೃಷಿ ಭೂಮಿಗೆ ಕೊಳವೆ ಬಾವಿಯಿಂದ ನೀರು ಹರಿಸುವ ಸಂಬಂಧ ವಿದ್ಯುತ್ ಸಂಪರ್ಕ (ಟಿ.ಸಿ) ನೀಡಲು ಯಾವ ಹೊಸ ಯೋಜನೆ ಹಮ್ಮಿಕೊಳ್ಳಲಾಗಿದೆ; ಯೋಜನೆಗೆ ಸಂಬಂಧಿಸಿದ ಸುತ್ತೋಲೆ ಒದಗಿಸುವುದು;

(ಆ) ನಾಗಮಂಗಲ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಈ ಯೋಜನೆ ನಿರ್ವಹಿಸುತ್ತಿರುವ ಗುತ್ತಿಗೆದಾರರು ಯಾರ್ಯಾರು; ಅಂದಾಜು ಮೊತ್ತವೆಷ್ಟು; (ಸಂಪೂರ್ಣ ವಿವರ ನೀಡುವುದು)

(ಇ) ರೈತರ ಕೃಷಿ ಭೂಮಿಯ ಪಂಪ್‌ಸೆಟ್‌ಗೆ ಸಂಪರ್ಕ ಕಲ್ಪಿಸುವ ಟ್ರಾನ್ಸ್ ಫಾರ್ಮರ್ (ಟಿ.ಸಿ) ದುರಸ್ಥಿಯಾದರೆ ಅದನ್ನು ಎಷ್ಟು ದಿನಗಳಲ್ಲಿ ಬದಲಾವಣೆ ಮಾಡಿ ಹೊಸ/ರಿಪೇರಿ ಮಾಡಲಾದ ಟಿ.ಸಿ.ಗಳನ್ನು ಅಳವಡಿಸಲಾಗುತ್ತದೆ; (ಅಳವಡಿಸಲು ಇರುವ ಕಾಲಾವಕಾಶ ಎಷ್ಟು; ಈ ಬಗೆಗಿನ ಸರ್ಕಾರದ ಸುತ್ತೋಲೆಯನ್ನು ನೀಡುವುದು)

(ಈ) ನಾಗಮಂಗಲ ತಾಲ್ಲೂಕು ಹೊಣಕೆರೆ ಹೋಬಳಿ ಕಿರಿಯ ಅಭಿಯಂತರರು ದುರಸ್ಥಿಯಲ್ಲಿರುವ ಟಿ.ಸಿ. ಬದಲಾವಣೆ ಮಾಡಲು ರೈತರಿಂದ ಹಣ ಕೇಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇವರ ವಿರುದ್ಧ ಯಾವ ಕ್ರಮಕೈಗೊಳ್ಳಲಾಗಿದೆ?